# ರೈತರ ಎರಡು 'ವಿಚಿತ್ರ' ಬೇಡಿಕೆಗಳು; ಲಂಚ ನಿರ್ಮೂಲನೆಗೆ ಅಪೂರ್ವ 'ಯೋಜನೆ'

ಮೊನ್ನೆ ಶೃಂಗೇರಿ ತಾಲೂಕು ರೈತ ಸಂಘದ ನೇತೃತ್ವದಲ್ಲಿ ರೈತರು ದೊಡ್ಡ ಮೆರವಣಿಗೆ ನಡೆಸಿ, ತಹಸೀಲ್ದಾರರ ಗೈರು ಹಾಜರಿಯಲ್ಲಿ ಅವರ ಪ್ರತಿನಿಧಿಗಳ ಮೂಲಕ ಸರ್ಕಾರಕ್ಕೆ ಕೆಲವು ಬೇಡಿಕೆಗಳನ್ನು ಸಲ್ಲಿಸಿದರು. ಅದರಲ್ಲಿ ಸ್ವಲ್ಪ ವಿಚಿತ್ರ ಎನ್ನಿಸಬಹುದಾದ ೨ ಬೇಡಿಕೆಗಳಿವೆ: ೧) ಸರ್ಕಾರಿ ನೌಕರರು ರೈತರಿಂದ ಲಂಚ ತೆಗೆದುಕೊಳ್ಳುವುದನ್ನು ನಿಲ್ಲಿಸಬೇಕು; ೨) ರೈತ ಮತ್ತು ಕೃಷಿಕಾರ್ಮಿಕರನ್ನು ಅಧಿಕಾರಿಗಳು ಗೌರವ-ಘನತೆಯಿಂದ ಕಾಣಬೇಕು

## 'ಯೋಜನೆ'

ಹೀಗೆ ಬೇಡಿಕೆ ಸಲ್ಲಿಸಿದ್ದಷ್ಟೇ ಅಲ್ಲ. ಲಂಚ ನಿರ್ಮೂಲನಕ್ಕೆ ರೈತ ಸಂಘ ಅಪೂರ್ವವಾದ ಒಂದು 'ಯೋಜನೆ'ಯನ್ನೂ ಹಾಕಿಕೊಂಡಿದೆ. ಎಲ್ಲ ಸದಸ್ಯರೂ ವಂತಿಗೆ ಹಾಕಿ ಒಂದು ಸಾಕಷ್ಟು ದೊಡ್ಡ ಮೊತ್ತದ ನಿಧಿ ಸಂಗ್ರಹಿಸಿಕೊಳ್ಳುವುದು. ಸರ್ಕಾರಿ ನೌಕರರು ಅಧಿಕಾರಿಗಳು ರೈತರ ಕೆಲಸವನ್ನು ಲಂಚ ಕೊಡದೆ ಮಾಡುವುದಿಲ್ಲ. ಸತಾಯಿಸುತ್ತಾರೆ. ಹೆಚ್ಚು ಕೇಳಿದರೆ "ಕಂಪ್ಲೇಂಟ್ ಮಾಡಿಕೋ; ಹೋಗು" ಎನ್ನುತ್ತಾರೆ. ಸುಮ್ಮಗೆ ಹೊರಗೆ ಬರುವುದು. ಹಾಗೆ ಹೇಳದ ಮನುಷ್ಯ ಸಂಜೆಗಾದರೂ ಹೊರಗೆ ಬರುತ್ತಾನೆ. ದಾರಿಯಲ್ಲಿ ಕಾದು, ನಿಮ್ಮ ಹೊಟ್ಟೆ ಎಷ್ಟು ಉರಿಸಿರುತ್ತಾನೋ ಅಷ್ಟನ್ನೂ ತೀರಿಸಿ "ಕಂಪ್ಲೇಂಟ್ ಮಾಡಿಕೋ ಹೋಗು" ಎನ್ನುವುದು. ಪೋಲೀಸಿಗೆ ದೂರು ಕೊಡಬಹುದು. ಮೊಕದ್ದಮೆ ದಾಖಲಾಗಿ ಕೋರ್ಟಿಗೆ ಬರುತ್ತೆ. ನ್ಯಾಯಾಧೀಶರೆದುರು "ಹೌದು ಸ್ವಾಮಿ. ನನ್ನ ಇಂಥ ಕೆಲಸಕ್ಕೆ ಇಂತಿಷ್ಟು ಲಂಚ ಕೇಳಿದ. ಕೊಡಲು ನನಗೆ ಶಕ್ತಿಯೂ ಇಲ್ಲ, ಇಷ್ಟವೂ ಇಲ್ಲ. ಕೊಡದೆ ಅಂವ ಕೆಲಸ ಮಾಡುವುದಿಲ್ಲ. ಅದಕ್ಕೆ ನನ್ನ ಹೊಟ್ಟೆಯ ಸಂಕಟ ತೀರಿಸಿದೆ" ಎಂದು ತಪ್ಪೊಪ್ಪಿಕೊಳ್ಳುವುದು. ದಂಡ ವಿಧಿಸುತ್ತಾರೆ. ರೈತಸಂಘದ 'ಲಂಚನಿರೋಧ ನಿಧಿ' ಉಂಟಲ್ಲ– ಅದರಿಂದ ದಂಡ ಕಟ್ಟುವುದು. ಹೀಗೇ........

## 'ಅರ್ಥವಾಗುವ ಭಾಷೆ'

ರೈತರನ್ನು ಹುರಿದು ಮುಕ್ಕುತ್ತಿರುವ, ಸುಲಿದು ನೆಕ್ಕುತ್ತಿರುವ ಜನಕ್ಕೆ ಅರ್ಥವಾಗುವ ಭಾಷೆ ಇದೊಂದೇ. ಮೊದಮೊದಲು ಪರಿಣಾಮ ಕಮ್ಮಿಯಿರಬಹುದು. ಶಿಕ್ಷೆ-ಪ್ರತೀಕಾರ ತೀವ್ರವಾಗಿರಬಹುದು. ಆದರೆ

# ಭಾಷಾ ಅಲ್ಪ ಸಂಖ್ಯಾತರ ಪರವಾಗಿ....

(ಹಿಂದಿನ ಸಂಚಿಕೆಯಿಂದ)

ಕರ್ನಾಟಕವು ಮದರಾಸ್, ಹೈದರಾಬಾದ್, ಮತ್ತು ಬೊಂಬಾಯಿ ಸಂಸ್ಥಾನಗಳ ಕೆಲವು ಭಾಗಗಳನ್ನು ಸೇರಿಸಿ ರಚನೆಯಾದ ಒಂದು ರಾಜ್ಯವೆಂಬುದನ್ನು ನಾವು ಮರೆಯಬಾರದು. ಹೀಗೆ ಸೇರ್ಪಡೆಯಾಗುವ ಮುಂಚೆ ಈ ಭಾಗದ ಜನರಿಗೆ ಸರ್ಕಾರಿ ಸೇವೆಗಳಲ್ಲಿ, ಭಾಷಾ ವಿಷಯಗಳಲ್ಲಿ ಎಲ್ಲಾ ರೀತಿಗಳಲ್ಲಿ ರಕ್ಷಣೆ ನೀಡಲಾಗುವುದೆಂದು ಕೇಂದ್ರವು ಆಶ್ವಾಸನೆ ನೀಡಿತ್ತು. "ಕನ್ನಡ ಕಲಿಯಿರಿ ಅಥವಾ ಕರ್ನಾಟಕ ಬಿಟ್ಟು ತೊಲಗಿ" ಎಂಬ ಘೋಷಣೆ ಈ ಭಾಗದ ಜನರೊಳಗಿನ ಸೌಹಾರ್ದಭಾವವನ್ನೇ ಅಲುಗಾಡಿಸುತ್ತದೆ. ಬಿಟ್ಟು ತೊಲಗಲು ಹೇಳಿದರೆ, ಈ ಭಾಗದ ಜನರೆಲ್ಲ ತಮ್ಮ ಮಾತೃ ರಾಜ್ಯಗಳಿಗೇ ಪುನಃ ಸೇರಲು ಬಯಸಬಹುದು. ಇದಲ್ಲದೇ ನೆರೆ ರಾಜ್ಯಗಳಲ್ಲಿ ೫೦ ಲಕ್ಷಕ್ಕೂ ಹೆಚ್ಚು ಮಂದಿ ಕನ್ನಡಿಗರು ಬದುಕುತ್ತಿದ್ದಾರೆ. ಆ ಎಲ್ಲಾ ರಾಜ್ಯಗಳೂ ಇಂಥ ಕಟ್ಟುನಿಟ್ಟಿನ ನೀತಿಯನ್ನು ಅನುಸರಿಸಿದರೆ ಆಗ ಅಲ್ಲಿನ ನಿಮ್ಮ ಅಣ್ಣ ತಮ್ಮಂದಿರ ಗತಿ ಏನು? ಅವರ ದುರದೃಷ್ಟವನ್ನು ನೀವು ತುಂಬಾ ಸಂತೋಷದಿಂದ ಆಚರಿಸುತ್ತೀರಲ್ಲವೇ? **ಹೌದು ನೀವು ಹಾಗೇ ಮಾಡುತ್ತೀರಿ; ಮಾಡಲೇಬೇಕು.**

ಮಾತೃ ಭಾಷೆ ವ್ಯಕ್ತಿಯ ಬದುಕಿನ ಬೇರ್ಪಡಿಸಲಾಗದ ಒಂದು ಸಮಗ್ರ ಭಾಗ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಅಭಿಪ್ರಾಯವನ್ನು ನಿಖರವಾಗಿ ಮತ್ತು ಪರಿಣಾಮಕಾರಿಯಾಗಿ ತಿಳಿಸಲು ಮಾತೃಭಾಷೆಯೇ ಮುಖ್ಯ ಸಾಧನ. ಆದ್ದರಿಂದ ಮಾತೃಭಾಷೆಯ ಆಳವಾದ ಅಧ್ಯಯನಕ್ಕೆ ಪ್ರಾಮುಖ್ಯತೆಯನ್ನೂ ಗಮನವನ್ನೂ ಕೊಡಬೇಕಾಗುತ್ತದೆ. ಆದ್ದರಿಂದ ಕನ್ನಡವನ್ನು ಎರಡನೇ ಕಡ್ಡಾಯ ಭಾಷೆಯಾಗಿ ಕಲಿಯುವಲ್ಲಿ ಪ್ರತಿಯೊಬ್ಬನಿಗೂ ತನ್ನ ಮಾತೃಭಾಷೆಯನ್ನು ಕಲಿಯಲು ಅವಕಾಶ ಇರಲೇ ಬೇಕು.

ಶ್ರೀ ಮಲ್ಲಿಕಾರ್ಜುನ ಭಟ್ಟರ ವಾದವನ್ನೇ ಸರಿಯೆಂದು ಒಪ್ಪಿಕೊಂಡಾಗಲೂ ಕನ್ನಡಿಗರು ಹೆಚ್ಚೇನನ್ನೂ ಕಳೆದುಕೊಂಡಂತಾಗುವುದಿಲ್ಲ. ಅವರ ಪ್ರಕಾರ ಶೇ.೯೦ರ ಭಾಗದಷ್ಟು ಕನ್ನಡಿಗರೇ ಆದ್ದರಿಂದ ಅವರೆಲ್ಲರೂ ಕನ್ನಡವನ್ನೇ ಪ್ರಥಮ ಭಾಷೆಯಾಗಿ ಆರಿಸಿಕೊಳ್ಳುತ್ತಾರೆ. ನಿಮ್ಮ ಕೇಳಿಕೆ ಶೇ. ೯೦ರ ಭಾಗ ಪೂರೈಸಲ್ಪಟ್ಟಾಗ ಉಳಿದ ಶೇ. ೧೦ ಜನರಿಗೆ ವಿನಾಯಿತಿಯನ್ನು ಕೊಟ್ಟು ನಿಮ್ಮ ಉದಾರ ಭಾವನೆಯನ್ನು ಏಕೆ ತೋರಿಸಬಾರದು? ಸ್ವಲ್ಪವೇ ಭಿನ್ನಾಭಿಪ್ರಾಯ ಇರುವ ಕಾರಣಕ್ಕೆ ನೂರರಲ್ಲಿ ಇಬ್ಬರನ್ನು ಮಾತ್ರ ಬದುಕಲು ಬಿಡುವುದಕ್ಕೂ ನೀವು ಹೃದಯ ಹೀನರಾಗಬೇಕೆ?

ಹಿಂದಿಯ ಹೇರಿಕೆಯನ್ನು ವಿರೋಧಿಸುವಲ್ಲಿ ಅವರ ವಾದದ ಅತ್ಯಂತ ದೊಡ್ಡ ದೌರ್ಬಲ್ಯವಿದೆ. 'ಹಿಂದಿ ಈಗಿರುವಂತೆ ಕೇವಲ ೫೦ ಅಂಕಗಳ ವಿಷಯವಾಗಿರುವಾಗಲೇ ವಿದ್ಯಾರ್ಥಿಗಳಿಗೆ ಅದನ್ನು ಪಾಸುಮಾಡುವುದು ಕಷ್ಟ; ಹಾಗಿರುವಾಗ ಹಿಂದಿಯನ್ನು ಕಡ್ಡಾಯ ಮಾಡಿ ಅದಕ್ಕೆ ನೂರು ಅಂಕಗಳನ್ನಿಟ್ಟರೆ ವಿದ್ಯಾರ್ಥಿಗಳಿಗೆ ಅದು ಖಂಡಿತಾ ಹೊರೆಯಾಗುತ್ತದೆ' ಎಂಬುದು ಅವರ ಅಭಿಪ್ರಾಯ. ಆದರೆ ಕಲಿಯುವ ಶ್ರದ್ಧೆ ಇದ್ದಾಗ ಯಾವ ಭಾಷೆಯನ್ನು ಕಲಿಯುವುದೂ ಕಷ್ಟವಲ್ಲ. ಇಂಗ್ಲಿಷ್‌ನಂತಹ ಸಂಪೂರ್ಣ ಪರದೇಶಿಯೂ ಅತ್ಯಂತ ಕ್ಲಿಷ್ಟವೂ ಆದ ಭಾಷೆಯದನ್ನು ಕಲಿಯಲು ಒಪ್ಪುವವರು ಹಿಂದಿಯನ್ನು ಏಕೆ ಕಲಿಯಬಾರದು?

ಕನ್ನಡಿಗರಾಗಿ ಕನ್ನಡವನ್ನೇ ಕಲಿಯುವವರು ಭಾರತೀಯರಾಗಿ ಹಿಂದಿಯನ್ನು ಏಕೆ ಕಲಿಯುವುದಿಲ್ಲ? ಇಂಗ್ಲೀಷನ್ನೂ ಯಾಕೆ ಕಲಿಯುತ್ತೀರಿ? ಇದೇ ತರ್ಕವನ್ನು ಮುಂದುವರಿಸುವುದಾದರೆ ಹಿಂದಿಯನ್ನು ನಿಮ್ಮ ಮೇಲೆ ಹೇರುವುದನ್ನು ವಿರೋಧಿಸುವ ನೀವು ಕನ್ನಡವನ್ನು ಬೇರೆಯವರ ಮೇಲೆ ಹೇಗೆ ಹೇರುತ್ತೀರಿ?

ಭಾಷಾಭಿಮಾನದ ಜ್ವಾಲೆಯು ನಮ್ಮೆಲ್ಲರ ಹೃದಯಗಳಲ್ಲೂ ಪ್ರಜ್ವಲಿಸಲಿ. ಆದರೆ ಆ ಜ್ವಾಲೆಗಳು ನಮ್ಮ ಅಜ್ಞಾನವನ್ನು ತೊಲಗಿಸಬೇಕೇ ಹೊರತು ಬೇರೆಯವರ ಮನೆಗಳನ್ನು ಸುಡಬಾರದು.

— ಗಂಗಾಧರ ಷರ್ಮ.

# ಹುಚ್ಚುಹೆಚ್ಚಾಯಿತು

— ಎಂ. ಯು. ಇಲಿಯಾಸ್.

ನಮ್ಮೂರಿನ ಹುಚ್ಚೇಗೌಡರು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಮೇಷ್ಟರ ಸಣ್ಣ ತಪ್ಪಿನಿಂದಾಗಿ ದಾಖಲೆಯಲ್ಲೆಲ್ಲ 'ಹುಚ್ಚಗೌಡ'ರಾದರು. ಎಲ್ಲರೂ 'ಹುಚ್ಚಗೌಡ' ಎಂದು ಕರೆಯುವುದು ಅವರಿಗೆ ಕಿರಿಕಿರಿಯಾಗುತ್ತಿತ್ತು.

ಗೌಡರಿಗೆ ಬೇಸರವಾಯ್ತು ತಮ್ಮ ಹೆಸರಿನ ಮೇಲೆ. ಸರಿ, ಆಪ್ತರೊಬ್ಬರ ಸಲಹೆಯಂತೆ ಹೆಸರು ಬದಲಿಸಲು ಬೆಂಗಳೂರು ಬಸ್ ಹತ್ತಿದರು. ನೂರಿನ್ನೂರು ಕೈಬಿಟ್ಟ ಮೇಲೆ ಅವರ ಇಷ್ಟದಂತೆ ಹೆಸರನ್ನು 'ಹೆಚ್ಚಗೌಡ' ಎಂದು ಬದಲಾಯಿಸಲಾಯಿತು.

ಮೂರ ತಿಂಗಳಲ್ಲೇ ಗೆಜೆಟ್‌ನ ಪ್ರತಿ ಗೌಡರ ಕೈ ಸೇರಿತು. ಅವರಿಗೆ ಖುಷಿಯೋ ಖುಷಿ. ಎಲ್ಲರಿಗೂ ತೋರಿಸುತ್ತಿದ್ದರು ತಮ್ಮ ಬದಲಾದ ಹೆಸರನ್ನು.

"ಏನು ಸ್ವಾಮಿ ಅವರು ತೋರಿಸ್ತಿರೋದು?" ಕೇಳಿದರು ಅಲ್ಲಿ ಕೂತಿದ್ದವರೊಬ್ಬರು.

ಹುಚ್ಚಗೌಡರ ಮಿತ್ರರೊಬ್ಬರು ಮುಸಿಮುಸಿ ನಗುತ್ತಾ ಹೇಳಿದರು, "ಅಯ್ಯೋ, ಅದೇನು ಹೇಳ್ತೀರಿ ನಾರಾಯ್ರೆ. ನಮ್ಮ ಹುಚ್ಚಗೌಡ್ರು ಬೆಂಗಳೂರಿಗೆ ಹೋಗಿ ಒಂದಿನ್ನೂರು ಖರ್ಚು ಮಾಡಿ ಬಂದ್ರು. ಅವರ 'ಹುಚ್ಚು' ಈಗ 'ಹೆಚ್ಚು' ಆಗಿದೆ"

"ಪಾಪ! ಪಾಪ!" ಲೊಚಗುಟ್ಟಿದರು, ಪ್ರಶ್ನೆ ಕೇಳಿದ ಭೂಪತಿ. ಹುಚ್ಚಗೌಡರು ಅಳುವುದೊಂದೇ ಬಾಕಿ.

ಶೃಂಗೇರಿ ತಾಲೂಕಿನ ಎಲ್ಲ ಕಡೆ ದಿನಕ್ಕೆ ಹತ್ತಿಪ್ಪತ್ತಾದರೂ ಇಂಥ (೩ನೇ ಪುಟಕ್ಕೆ)

# ನಾವು ಬೆಳಕಿನ ಲೋಕದ ಹಕ್ಕುದಾರರು

ಗೆಳತಿ ಜಗತ್ತಿನ ಎಲ್ಲ ದ್ವೇಷಗಳ ಮೇಲಿನಿಂದ
ನಾವು ಪ್ರೀತಿಯ ಸೇತುವೆ ಕಟ್ಟಬೇಕು
ದುಃಖ ದಾರಿದ್ರ್ಯಗಳ ಬೆಂಕಿ ಕಡಲನ್ನು ದಾಟಬೇಕು
ಗೆಳತಿ ರಕ್ತವಿದೆ ಇಲ್ಲಿ ಕಪ್ಪು ಕಮಲಗಳ ಕೆಂಪು ಹೃದಯದಲ್ಲಿ
ಹತಾಶ ಮನುಷ್ಯರ ಕನಸುಗಳಿವೆ ಕತ್ತಲ ಗರ್ಭದಲ್ಲಿ
ಈ ಎಲುಬು ಹಂದರಗಳನ್ನು ತಿನ್ನುತ್ತಿರುವ
ಸಾವಿನ ಜತೆ ನಾವು ಮಾತನಾಡಬೇಕು

ನಾವು ಕತ್ತಲೆಯ ಮನುಷ್ಯರ ರಕ್ತ ಮತ್ತು ವೀರ್ಯಗಳಿಂದ
ಇತಿಹಾಸವಿಲ್ಲದ ಸ್ವಪ್ನಗಳಿಂದ ಬಂದವರು
ಆದರೆ ನಾವು ಮಾತಾಡಬೇಕು ಈ ನಾಡಿನ ಮಹಾ ಯಾತನೆಗಳ ಜತೆ
ಈ ಕತ್ತಲ ನಾಡಿನ ಮಾನವೀಯ ಕನಸುಗಳ ನಿಜವಾಗಿಸಬೇಕು
ಈ ಮಣ್ಣಿನಲಿ ನಾವು ಸುರಿಸಿದ ರಕ್ತವು ಪ್ರೇಮದ ನದಿ ತುಂಬುವಂತಿರಲಿ
ಜಗತ್ತಿನ ತುಂಬ ಹೂ ಹಣ್ಣುಗಳ ಅರಳಿಸಲಿ

ಕಡು ಕತ್ತಲಲ್ಲಿ ತತ್ತರಿಸುತ್ತಿರುವ ನಮ್ಮ ಕಪ್ಪು ಆತ್ಮಗಳು
ಎಲ್ಲ ಉಕ್ಕಿನ ಬೇಡಿಗಳಿಂದ ಬಿಡುಗಡೆ ಪಡೆಯಲು
ಹೋರಾಡಲೇ ಬೇಕು
ಈ ಕತ್ತಲೆ ಮತ್ತು ಸಾವಿನ ವಿರುದ್ಧ

ಯಾಕೆಂದರೆ ನಾವು ಪ್ರೀತಿಯ ಲೋಕದ ಪಾಲಿವಾಳಗಳು
ಕನಸಿನ ಗರ್ಭದ ಜ್ವಾಲಾಮುಖಿಗಳು
ಕತ್ತಲ ಕೊಲ್ಲುವ ಬೆಳಕಿನ ಲೋಕದ ಹಕ್ಕುದಾರರು

— ಮುಳ್ಳೂರು ನಾಗರಾಜ್.

## ಕೊಪ್ಪ ತಾ॥ ನಲ್ಲಿ ಸ. ಗ್ರಾ. ಅ. ಯೋಜನೆಗಾಗಿ

# ಬ್ಯಾಂಕುಗಳಿಗೆ ಗ್ರಾಮಗಳ ಹಂಚಿಕೆ.

ಕೊಪ್ಪ: ೧೯೮೨-೮೩ ನೇ ಸಾಲಿಗಾಗಿ ಈ ತಾಲೂಕಿನ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಸಮಿತಿಯ ಸಭೆ ಅಧ್ಯಕ್ಷರಾದ ಉಪವಿಭಾಗಾಧಿಕಾರಿ ಕೆ. ನರಸಿಂಹಯ್ಯನವರ ಅಧ್ಯಕ್ಷತೆಯಲ್ಲಿ ಮೇ ೨೦ ರಂದು ನಡೆಯಿತು. ತಾಲೂಕಿನ ಬಹುತೇಕ ಬ್ಯಾಂಕುಗಳ ಪ್ರತಿನಿಧಿಗಳು ಭಾಗವಹಿಸಿದ್ದರು.

ಯೋಜನೆಯ ೧೯೮೧-೮೨ ರ ಪ್ರಗತಿಯನ್ನು ಸಭೆ ಪರಾಮರ್ಶಿಸಿತು. ತಾಲೂಕಿನ ಕೆಲವು ಗ್ರಾಮಗಳಲ್ಲಿ ಕಳೆದ ವರ್ಷಕ್ಕಾಗಿ ಆಯ್ಕೆಯಾದ ಪ್ರಯೋಜನದಾರರೆಲ್ಲರಿಗೂ ಸಹಾಯ ದೊರಕಿಲ್ಲದಿರುವುದನ್ನು ಬಿ. ಜಿ. ಚಿದಂಬರ್‌ರವರು ಸಭೆಯ ಗಮನಕ್ಕೆ ತಂದಾಗ, ಮೊದಲು ಅವರಿಗೆಲ್ಲ ಸಹಾಯ ಒದಗಿಸಿ ನಂತರ ಉಳಿದ ಗ್ರಾಮಗಳನ್ನು ಕೈಗೆತ್ತಿಕೊಳ್ಳಬೇಕೆಂದು ಸಭೆ ನಿರ್ಣಯಿಸಿತು.

೮೨-೮೩ ನೇ ಸಾಲಿನಲ್ಲಿ ಅಭಿವೃದ್ಧಿಗಾಗಿ ತಾಲೂಕಿನ ಉಳಿದೆಲ್ಲ ಗ್ರಾಮ ಸಮುದಾಯಗಳನ್ನೂ ತಾಲೂಕಿನ ಎಲ್ಲಾ ಬ್ಯಾಂಕುಗಳಿಗೂ ಹಂಚಲಾಯಿತು.

## ಮಹಿಳಾ ಸಮಾಜ ಉದ್ಘಾಟನೆ

ಗುಡ್ಡೇತೋಟ: ಇಲ್ಲಿನ ಮೈತ್ರಿ ಮಹಿಳಾ ಸಮಾಜದ ಉದ್ಘಾಟನೆಯು ಪಂಚಾಯ್ತಿ ಅಧ್ಯಕ್ಷ ಐ. ಹೆಚ್. ಮೊಹಿಯುದ್ದೀನ್ ರ ಅಧ್ಯಕ್ಷತೆಯಲ್ಲಿ ಈಚೆಗೆ ನೆರವೇರಿತು. ಕು|ಪ್ರೇಮಲತಾ (೪ವರ್ಷ) ಜ್ಯೋತಿ ಬೆಳಗಿ ಉದ್ಘಾಟಿಸಿದಳು.

ಜಿ. ಸುಬ್ಬರಾವ್ ಮತ್ತು ಡಾ|ಬಾಲರಾಜ್ ಮುಖ್ಯ ಅತಿಥಿಗಳಾಗಿದ್ದರು. ತಾಲೂಕಿನ ಮುಖ್ಯ ಸೇವಿಕೆ ಸುನೀತಮ್ಮ ಸಂಘದ ಚಟುವಟಿಕೆಯ ರೂಪರೇಖೆಗಳನ್ನು ಕಾರ್ಯಕರ್ತರಿಗೆ ತಿಳಿಸಿದರು. ಜಿ. ಎಸ್. ಅನಂತರಾವ್ ಸ್ವಾಗತಿಸಿದರು. ಶ್ರೀಮತಿ ಪದ್ಮಾ ಅನಂತರಾವ್ ವಂದಿಸಿದರು.

ಸಮಾಜಕ್ಕೆ ಒಟ್ಟು ೪೫ ಜನ ಸದಸ್ಯೆಯರಿದ್ದಾರೆ. ಅಧ್ಯಕ್ಷೆಯಾಗಿ ಆಯ್ಕೆಯಾಗಿರುವ ಪದ್ಮಾ ಅನಂತರಾವ್ ಸೇರಿದಂತೆ ೯ ಜನರ ಕಾರ್ಯಕಾರಿ ಸಮಿತಿ ರಚನೆಯಾಗಿದೆ.

## ಕೊಪ್ಪದಲ್ಲಿ ಕಲೆಗೆ ಬೆಲೆ ಇಲ್ಲ

(೩ನೇ ಪುಟದಿಂದ)

ಕೆಲ ಜನರು ತಾವು ಮುಂದೆ ಬರುವುದಿಲ್ಲ. ಮುಂದೆ ಬರುವವರನ್ನು ಕಂಡು ಸಹಿಸುವುದಿಲ್ಲ. ಆದ್ದರಿಂದ ನಮ್ಮ ಕೊಪ್ಪದಲ್ಲಿ ಕಲೆಗೆ ಖಂಡಿತಾ ಬೆಲೆ ಇಲ್ಲವೆಂದು ನನಗೆ ಅನ್ನಿಸಿದೆ. ನಾಟಕ ನೋಡುತ್ತಿದ್ದ ಕೆಲವರು ಸ್ಥಳದಲ್ಲೇ ತಮ್ಮ ಮನಸ್ಸಿಗೆ ಬಂದ ಹಾಗೆ ಹೇಳುವುದು, ಅರಚುವುದನ್ನು ನೋಡಿ ತುಂಬಾ ಬೇಸರವಾಗುತ್ತಿತ್ತು. ನಮ್ಮೂರಿನ ಕಲಾವಿದರು ಉತ್ತಮ ಕಾರ್ಯಕ್ರಮ ಕೊಟ್ಟು ಜನರನ್ನು ಸಂತೋಷಪಡಿಸಿದ್ದಾರೆ. ಆದರೆ ಕೆಲ ಜನರಿಗೆ ಅದು ಅರ್ಥವಾಗದೆ ಇರಬಹುದು.

ಬೇರೆ ಊರಿನಿಂದ ಯಾರೇ ಬಂದು ಹೇಗೆ ಬೇಕಾದರೂ ಕಾರ್ಯಕ್ರಮ ಕೊಡಲಿ, ಅದಕ್ಕೆ ನಮ್ಮೂರಿನ ಜನರು ಹೊಗಳುತ್ತಾರೆ. ಸ್ಥಳೀಯ ಕಲಾವಿದರು ತಮಗೆ ತಿಳಿದ ಹಾಗೆ, ಒಳ್ಳೆಯದಾಗಿ ಕಾರ್ಯಕ್ರಮ ಕೊಟ್ಟರೂ ಅದನ್ನು ನೋಡಿ ಹೊಗಳಿ ಪ್ರೋತ್ಸಾಹಿಸುವವರು ಇಲ್ಲಿ ತುಂಬಾ ಕಡಿಮೆ.

ಆದ್ದರಿಂದ ಇನ್ನು ಮುಂದಾದರೂ ನಮ್ಮ ಜನಗಳು ಈ ರೀತಿಯಾಗಿ ಟೀಕೆ ಮಾಡದೆ ಕಲೆ ಕಲಾವಿದರಿಗೆ ಸಾಕಷ್ಟು ಪ್ರೋತ್ಸಾಹಿಸುವುದರ ಮೂಲಕ ಸಹಕಾರ ದಯೆ ಅನುಕಂಪ ತೋರಿಸಿ ನಮ್ಮೂರಿನ ಹೆಸರು ಮುಂದೆ ಬರುವಂತಾಗಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಒಬ್ಬ ನೊಂದ ಕಲಾವಿದ, ಕೊಪ್ಪ.

## ವಾರ್ಷಿಕೋತ್ಸವ

ಹೆಸ್ಗಲ್: ಇಲ್ಲಿನ ಹನುಮಾನ್ ಯುವಕ ರೈತ ಸಂಘ ಮತ್ತು ಶ್ರೀ ಉಮಾಮಹೇಶ್ವರಿ ಮಹಿಳಾ ಸಮಾಜ ಇವುಗಳ ವಾರ್ಷಿಕೋತ್ಸವ ಮೇ ೨೦ ರಂದು ಬಿ.ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ನಡೆಯಿತು. ತಹಸೀಲ್ದಾರ್, ಕ್ಷೇತ್ರಾಭಿವೃದ್ಧಿ ಅಧಿಕಾರಿ, ಸಹಾಯಕ ಕೃಷಿ ನಿರ್ದೇಶಕರು, ಮತ್ತು ಬೆಳವಿನಕೊಡಿಗೆ ಗ್ರಾಮಪಂಚಾಯ್ತಿ ಅಧ್ಯಕ್ಷ ಹೆಚ್. ಎನ್. ಚಿನ್ನಯ್ಯ ಇವರುಗಳು ಮುಖ್ಯ ಅತಿಥಿಗಳಾಗಿದ್ದರು. ಹಿಂದಿನ ಜಿಲ್ಲಾಧಿಕಾರಿ ಕೆ. ನರಸಿಂಹಯ್ಯ ಸಮಾರೋಪ ಭಾಷಣ ಮಾಡಿದರು. ತಾ. ಅ. ಮಂ. ಸದಸ್ಯ ಜೆ.ಸಿ. ಸುಬ್ರಾಯ್‌ರಿಂದ ಕಥಾಕಾಲಕ್ಷೇಪ ನಡೆಯಿತು.

ಪಂಚಾಯ್ತಿ ಅಧ್ಯಕ್ಷರು ಸೀತಾನದಿಗೆ ಸೇತುವೆ ಹಾಗೂ ಊರಿಗೆ ಕುಡಿಯುವ ನೀರಿನ ಬಾವಿಗಳನ್ನು ಮಂಜೂರು ಮಾಡುವಂತೆ ಜಿಲ್ಲಾಧಿಕಾರಿಗಳಲ್ಲಿ ಮನವಿ ಮಾಡಿದರು. ಹೆಸ್ಗಲ್ ಗ್ರಾಮದ ಸುತ್ತಲೂ ಸೀತಾನದಿ ಮತ್ತು ಮಂದರ ಹಳ್ಳ ಆವರಿಸಿದ್ದು, ಊರ ಒಂದು ದ್ವೀಪದಂತಾಗಿದ್ದು ಮಳೆಗಾಲದಲ್ಲಿ ಊರಿನವರು ಬಹಳ ತೊಂದರೆ ಪಡುತ್ತಿರುವುದನ್ನು ಅವರು ವಿವರಿಸಿದರು.

ಪಂಚಾಯ್ತಿ ಕಾರ್ಯದರ್ಶಿ ಗಣೇಶ್ ಸ್ವಾಗತಿಸಿ, ಯುವಕ ರೈತ ಸಂಘದ ಅಧ್ಯಕ್ಷ ಕೃಷ್ಣಪ್ಪ ವಂದಿಸಿದರು.

## ಉದ್ಯೋಗ ವಾರ್ತೆ

ಸ್ಟೇಟ್ ಬ್ಯಾಂಕ್ ಗುಂಪಿನ ಪ್ರಾದೇಶಿಕ ಆಯ್ಕೆ ಮಂಡಳಿಯಿಂದ ಗುಮಾಸ್ತರು ಮತ್ತು ತತ್ಸಮಾನ ಹುದ್ದೆಗಳಿಗೆ ಅರ್ಜಿ ಕರೆಯಲಾಗಿದೆ. ಚಿಕ್ಕಮಗಳೂರು, ಶಿವಮೊಗ್ಗ, ದ. ಕ., ಉ. ಕ. ಜಿಲ್ಲೆಗಳನ್ನೊಳಗೊಂಡ ಮಂಗಳೂರು ಜೋನ್‌ನಲ್ಲಿ ಒಟ್ಟು ೪೯ ಹುದ್ದೆಗಳಿವೆ. ಅರ್ಜಿ ಸಲ್ಲಿಸಲು ಕೊನೇ ದಿನ: ಜೂನ್ ೨೧ ಹೆಚ್ಚಿನ ವಿವರಗಳಿಗೆ ಮೇ ೨೦ ರ ಇಂಡಿಯನ್ ಎಕ್ಸ್‌ಪ್ರೆಸ್ ಅಥವಾ ೨೩ ರ ಕನ್ನಡಪ್ರಭ ನೋಡಿ.

ಸಂಪಾದಕ, ಪ್ರಕಾಶಕ ಹಾಗೂ ಮುದ್ರಕ:
**ಸಿರಿಮನೆ ನಾಗರಾಜ್**
ಅಚ್ಚು: ನೇಸರ ಮುದ್ರಣ, ಕೊಪ್ಪ.

## ಬೇಗಾನೆ ನಿರಾಕರಣೆ

(ಒಂದನೇ ಪುಟದಿಂದ)

"ಈ ಕ್ಷೇತ್ರದಲ್ಲಿ ನನ್ನ ಕೆಲಸದ ಬಗ್ಗೆ ಯಾರೂ ಚಕಾರ ಎತ್ತುವಂತಿಲ್ಲ. ಮಂತ್ರಿಯಾಗಿ ಎರಡೇ ವರ್ಷದಲ್ಲಿ ಬೇಕಾದಷ್ಟು ಕೆಲಸ ಆಗಿದೆ. ಆದ್ದರಿಂದ, ನನ್ನ ಏಳಿಗೆ ಯನ್ನು ಸಹಿಸದ ವಿರೋಧ ಪಕ್ಷದವರು ಚುನಾವಣೆ ಹತ್ತಿರವಾಗುತ್ತಿದ್ದಂತೆ ಯಾವುದಾದರೊಂದು ರೀತಿ ನನ್ನ ಕೀರ್ತಿಗೆ ಮಸಿ ಬಳಿಯುವ ಯತ್ನ ಇದು" ಎಂದರು.

"ಚಾರಿತ್ರ್ಯ ವಧೆಗೆ ಪ್ರಯತ್ನಿಸಬೇಡಿ" ಎಂದ ಅವರು, ಆಗಬೇಕಾಗಿರುವ ಕೆಲಸಗಳನ್ನು ಒಮ್ಮನಸ್ಸಿನಿಂದ ಮಾಡೋಣ. ಪಕ್ಷಭೇದವನ್ನು ಚುನಾವಣೆಯ ವೇದಿಕೆಗೆ ಮಿತಗೊಳಿಸೋಣ" ಎಂದೂ ವಿರೋಧ ಪಕ್ಷಗಳಿಗೆ ಕಿವಿಮಾತು ಹೇಳಿದರು. ಕಮ್ಮರಡಿ, ಬಂಡಿಗಡಿ, ಗುಣವಂತೆ ಬಡಾವಣೆಗಳಲ್ಲಿ ಗ್ರಾಮಾಂತರ ನೀರು ಸರಬರಾಜು ಯೋಜನೆಗೆ ಶಂಕುಸ್ಥಾಪನೆ, ಕೊಪ್ಪ- ನವಿಮಾರ್ಗದಲ್ಲಿ ಮುಸುರೆಹಳ್ಳ ಸೇತುವೆಗೆ ಶಂಕು ಸ್ಥಾಪನೆ, ಎತ್ತಿನಹಟ್ಟಿ ಸೇತುವೆ ಉದ್ಘಾಟನೆ- ಈ ಎಲ್ಲ ಕಾರ್ಯಕ್ರಮಗಳಲ್ಲಿ ಮಂತ್ರಿಗಳ ಜೊತೆ ಲೋಕಸಭಾ ಸದಸ್ಯ ಡಿ.ಎಂ.ಪುಟ್ಟೇಗೌಡ, ಜಿಲ್ಲಾ ಯುವ ಕಾಂಗ್ರೆಸ್ ಅಧ್ಯಕ್ಷ ಜಯಪ್ರಸಾದ್, ಬಿ. ಜಿ. ಚಿದಂಬರ್ ಭಾಗವಹಿಸಿದ್ದರು. ಕಾರ್ಯಕ್ರಮದಂತೆ ಬರಬೇಕಾಗಿದ್ದ ಲೋಕೋಪಯೋಗಿ ಮಂತ್ರಿ ಕಾಗೋಡು ತಿಮ್ಮಪ್ಪ ಬಂದಿರಲಿಲ್ಲ.

ಕ್ಷೇತ್ರಾಭಿವೃದ್ಧಿ ಅಧಿಕಾರಿಗಳವರ ಕಛೇರಿ,
ಕೊಪ್ಪ—577126
ದಿನಾಂಕ: 20ನೇ ಮೇ 1982.

## -:ಪ್ರಕಟಣೆ:-

ಕೊಪ್ಪ ಟೌನ್‌ನಲ್ಲಿ ಸರ್ಕಾರದ ವತಿಯಿಂದ ನಡೆಯುತ್ತಿರುವ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಬಾಲಕರ ವಿದ್ಯಾರ್ಥಿ ನಿಲಯ, ಸಾರ್ವಜನಿಕ ಬಾಲಕರ ವಿದ್ಯಾರ್ಥಿ ನಿಲಯ ಮತ್ತು ಬಾಲಕಿಯರ ವಿದ್ಯಾರ್ಥಿ ನಿಲಯ ಬಾಳಗಡಿ. ಈ ಮೇಲ್ಕಂಡ ಮೂರು ವಿದ್ಯಾರ್ಥಿ ನಿಲಯಗಳಿಗೆ 1982-83 ನೇ ಸಾಲಿಗಾಗಿ 5 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವರ್ಗದ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಪ್ರವೇಶ ಕೋರುವ ವಿದ್ಯಾರ್ಥಿಗಳು ದಿನಾಂಕ: 5-6-82 ರೊಳಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಕೊಪ್ಪ ಇವರಿಗೆ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ವಿದ್ಯಾರ್ಥಿ ನಿಲಯದಲ್ಲಿ 50 ವಿದ್ಯಾರ್ಥಿಗಳಿಗೆ ಅವಕಾಶವಿದ್ದು ಈ ಕೆಳಕಂಡಂತೆ ಶೇಕಡಾವಾರು ಸ್ಥಳಾವಕಾಶವಿರುತ್ತದೆ.

| | |
|---|---|
| 1) ನಿಮ್ನ ಜಾತಿ : ನಿಮ್ನ ಪಂಗಡ | ಶೇ.25(ಎಸ್.ಸಿ/ಎಸ್.ಟಿ) |
| 2) ಹಿಂದುಳಿದ ಜನಾಂಗ | ಶೇ. 30 (ಬಿ. ಸಿ. ಎಂ.) |
| 3) ಹಿಂದುಳಿದ ಜಾತಿ | ಶೇ. 15 (ಬಿ. ಸಿ. ಸಿ) |
| 4) ಹಿಂದುಳಿದ ಬುಡಕಟ್ಟು | ಶೇ. 7.5 (ಬಿ. ಟಿ.) |
| 5) ವಿಶೇಷ ಗುಂಪು | ಶೇ. 22 5 (ಎಸ್. ಜಿ ) |

2) ಸಾರ್ವಜನಿಕ ಬಾಲಕರ ವಿದ್ಯಾರ್ಥಿ ನಿಲಯದಲ್ಲಿ ಒಟ್ಟು 60 ವಿದ್ಯಾರ್ಥಿಗಳಿಗೆ ಅವಕಾಶವಿದ್ದು ಶೇಕಡಾವಾರು ಸ್ಥಳಾವಕಾಶ ಈ ಕೆಳಕಂಡಂತಿರುತ್ತದೆ.

1) ನಿಮ್ನ ಜಾತಿ ಮತ್ತು ನಿಮ್ನ ಪಂಗಡ-ಶೇ. 75 (ಎಸ್. ಸಿ /ಎಸ್ .ಟಿ)
2) ಇತರೆ ಹಿಂದುಳಿದ ಎಲ್ಲಾ ವರ್ಗದವರಿಗೆ ಶೇ. 25 (ಒ.ಬಿ. ಸಿ)

3) ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿ ನಿಲಯದಲ್ಲಿ ಒಟ್ಟು 25 ವಿದ್ಯಾರ್ಥಿನಿಯರಿಗೆ ಅವಕಾಶವಿದ್ದು ಶೇಕಡಾವಾರು ಸ್ಥಳಾವಕಾಶ ಈ ಕೆಳಕಂಡಂತಿರುತ್ತದೆ.

1) ನಿಮ್ನ ಜಾತಿ ಮತ್ತು ನಿಮ್ನ ಪಂಗಡ-ಶೇ. 75 (ಎಸ್. ಸಿ /ಎಸ್.ಟಿ)
2) ಇತರೇ ಹಿಂದುಳಿದ ಎಲ್ಲಾ ವರ್ಗದವರಿಗೆ ಶೇ. 25 (ಒ. ಬಿ. ಸಿ)

ಮೇಲ್ಕಂಡ ವಿದ್ಯಾರ್ಥಿ ನಿಲಯಗಳಿಗೆ ಸೇರಬಯಸುವ ವಿದ್ಯಾರ್ಥಿಗಳು ನಿಗದಿಯಾದ ಅರ್ಜಿ ಫಾರಂಗಳನ್ನು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳವರ ಕಾರ್ಯಾಲಯದ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ. ಭರ್ತಿ ಮಾಡಿದ ಅರ್ಜಿಯೊಂದಿಗೆ ವಿದ್ಯಾರ್ಥಿಗಳು ತಮ್ಮ ಜಾತಿ, ವರಮಾನದ ಸರ್ಟಿಫಿಕೇಟುಗಳನ್ನು (ಫಾರಂ ನಂ. 1, 2, 3 ರಲ್ಲಿ ) ಮತ್ತು ಹಿಂದಿನ ಸಾಲಿನಲ್ಲಿ ತೇರ್ಗಡೆಯಾದ ತರಗತಿಯ ಅಂಕಪಟ್ಟಿಯನ್ನು ಲಗತ್ತಿಸಲು ಸೂಚಿಸಲಾಗಿದೆ.

ಸೂಚನೆ:- 1981-82 ನೇ ಸಾಲಿನಲ್ಲಿ ಮೇಲ್ಕಂಡ ವಿದ್ಯಾರ್ಥಿ ನಿಲಯಗಳಲ್ಲಿ ವ್ಯಾಸಂಗ ಮಾಡುತ್ತಿದ್ದು ತೇರ್ಗಡೆಯಾಗಿರುವ ವಿದ್ಯಾರ್ಥಿಗಳೂ ಸಹ ಮೇಲೆ ವಿವರಿಸಿರುವಂತೆ ಎಲ್ಲಾ ದಾಖಲಾತಿಗಳೊಡನೆ 1982-83 ನೇ ಸಾಲಿಗೆ ಪ್ರವೇಶಕ್ಕಾಗಿ ಅರ್ಜಿಯನ್ನು ನಿಗದಿಪಡಿಸಿರುವ ದಿನಾಂಕದೊಳಗಾಗಿ ಸಲ್ಲಿಸತಕ್ಕದ್ದು.

ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಛೇರಿಯ ವೇಳೆಯಲ್ಲಿ ಬಂದು ಪಡೆಯಬಹುದಾಗಿರುತ್ತದೆ.

(ಸಹಿ)
ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು,
ಕೊಪ್ಪ.